ಕೆ. ಅಭಿಶಂಕರ್

# ಕಂಪಿಲಿ/ಕುಮ್ಮಟ : ಚಿಕ್ಕ ರಾಜ್ಯದ ದೊಡ್ಡ ಮಾರ್ಮಿಕ ಪಾತ್ರ

ಇದುವರೆಗೆ ತಿಳಿದಮಟ್ಟಿಗೆ, ಕೇವಲ ಸುಮಾರು ಅರ್ಧ ಶತಮಾನದಷ್ಟೇ ಕಾಲ ಬಾಳಿ, ಬೆಳಗಿದ ಕಂಪಿಲಿ ಅಥವಾ ಕುಮ್ಮಟ ರಾಜ್ಯದ ಘಟನಾವಳಿ ತುಂಬ ಕುತೂಹಲಕರವೂ ವಿಸ್ಮಯಕರವೂ ಆಗಿದೆ. ಈಗಿನ ರಾಯಚೂರು ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿ ಅಭೇದ್ಯವಾದ ಬೆಟ್ಟಗುಡ್ಡಗಳ ಮಧ್ಯೆ, ತುಂಗಭದ್ರೆಯ ಉತ್ತರಕ್ಕೆ ಭದ್ರವಾದ ಕೋಟೆಯುಳ್ಳ ಕುಮ್ಮಟ ಇವರ ರಾಜಧಾನಿ. ತುಂಗಭದ್ರೆಯ ದಕ್ಷಿಣಕ್ಕೆ ಈಗಿನ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿರುವ ಕಂಪಿಲಿ ಅದರ ವಶದಲ್ಲಿದ್ದ ಒಂದು ಮುಖ್ಯ ಸ್ಥಳ. ಅದು ಎಂದೂ ಇದರ ರಾಜಧಾನಿಯಾಗಿರಲಿಲ್ಲ. ಆದರೆ, ಕರ್ನಾಟಕದ ದಕ್ಷಿಣೋತ್ತರ ಭಾಗಗಳನ್ನು ಕೂಡಿಸುವ ಹಂಪೆಯ ಪರಿಸರದ ಈ ಕಂಪಿಲಿಗೆ ಹಿರಿದಾದ ಹಿನ್ನೆಲೆ ಇದೆ. ೧೧ನೆಯ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಒಂದು ಪ್ರಾಂತೀಯ ರಾಜಧಾನಿಯಾದ ಕಂಪಿಲಿ ಒಂದು ಪರಂಪರೆಯನ್ನು, ಪ್ರಸಿದ್ಧಿಯನ್ನು ಪಡೆಯಿತು. ಆದ್ದರಿಂದ, ಚಾಲುಕ್ಯರು ಆಳಿದ ಅನೇಕ ದಶಕಗಳ ಬಳಿಕ ತುಂಗಭದ್ರೆಯ ದಕ್ಷಿಣೋತ್ತರದ ಈ ಪ್ರದೇಶದ ಮೇಲೆ ಈ ಮನೆತನದವರ ಅಧಿಕಾರ ಸ್ಥಾಪಿತವಾದರೂ, ಇವರದು ಕಂಪಿಲಿಯ ರಾಜ್ಯವೆಂದು ಕರೆಯಲ್ಪಟ್ಟಿರುವುದು ಅಸಹಜವಲ್ಲ; ಇಂಥ ಬೇರೆ ಉದಾಹರಣೆಗಳೂ ಇವೆ. ಇವರ ಎರಡನೆಯ ನಾಯಕನಿಗೆ ಕಂಪಿಲರಾಯನೆಂಬ ಹೆಸರೂ ಇದ್ದಿತು.

ಸೇವುಣರು, ಕಾಕತೀಯರು ಹಾಗೂ ಹೊಯ್ಸಳರು —ಇವರ ಪೈಪೋಟಿಯ ತ್ರಿಕೋಣದ ಮಧ್ಯೆ ತಡೆ-ರಾಜ್ಯ (buffer state) ಆಗಿ ಇದ್ದು, ಇದು ತನ್ನದೇ ಸ್ವಂತಿಕೆಯನ್ನು, ಪ್ರತ್ಯೇಕತೆಯನ್ನು ಉಳಿಸಿ, ಬೆಳೆಸಿಕೊಳ್ಳಲು ಸಮರ್ಥವಾಗಿ ಹೋರಾಟ ನಡೆಸಿದ್ದು ಒಂದು ಅಸಾಮಾನ್ಯ ಸಂಗತಿ. ಈ ಸೆಣಸಾಟದಲ್ಲಿ, ಈ ನಾಯಕರು ಸ್ಥೈರ್ಯದಿಂದ ವ್ಯವಹರಿಸುತ್ತಿದ್ದರು. ಪರರ ಪಾದಪದ್ಮೋಪಜೀವಿಗಳಾಗಿರಲಿಲ್ಲ.

ಸೇವುಣ ಮತ್ತು ಹೊಯ್ಸಳರ ನಡುವೆ ೧೨೭೬ರಲ್ಲಿ ಹೊಯ್ಸಳರ ರಾಜಧಾನಿಯ ಬಳಿಯೇ ಬೆಳವಡಿಯಲ್ಲಿ ನಡೆದ ಘೋರ ಕದನದಲ್ಲಿ ಹೊಯ್ಸಳರ ಪರವಾಗಿ ಒಂದು ಮುಖ್ಯ ಪಾತ್ರವಹಿಸಿದ್ದರ ಮೂಲಕ ಮೊಟ್ಟಮೊದಲು ಇವರು ನಮ್ಮ ಗಮನಕ್ಕೆ ಬರುತ್ತಾರೆ. ಕುಮ್ಮಟ ದುರ್ಗದ ಮುಮ್ಮಡಿ ಸಿಂಗೇಯನಾಯಕನ ಮಗ ಖಂಡೇಯರಾಯ (ಅಂದರೆ ಕಂಪಿಲರಾಯ) ಹೊಯ್ಸಳರಿಗೆ ಬಂದೊದಗಿದ್ದ ಈ ದೊಡ್ಡ ವಿಪತ್ತಿನ ಸಮಯದಲ್ಲಿ ಅವರಿಗೆ ನೆರವಾಗಿ ಸೇವುಣರ ಸೇನೆಯನ್ನು ಬೆನ್ನಟ್ಟಿದ. ಹೊಯ್ಸಳರ ಪಕ್ಷಪಾತಿಯಾಗಿದ್ದು, ಸೇವುಣರ ವಿರೋಧಿಯಾಗಿದ್ದ ಮುಮ್ಮಡಿ ಸಿಂಗೇಯನಾಯಕನ ಮೇಲೆ ೧೨೮೦ರಲ್ಲಿ ಸೇವುಣರು ದಾಳಿಮಾಡಲಾಗಿ ಕುರಗೋಡಿನಲ್ಲಿ ನಡೆದ ಕದನದಲ್ಲಿ ಸೇವುಣರ ಸೇನಾಪತಿ ಚಾವುಂಡರಸ ಕೊಲ್ಲಲ್ಪಟ್ಟ. ಕುಮ್ಮಟರನ್ನು ಮುರಿಯಲು ಸೇವುಣರು ತದನಂತರವೂ ಎರಡು ಬಾರಿ ಪ್ರಯಾಸಮಾಡಿ ವಿಫಲರಾದರು. ಸುಮಾರು ೧೨೮೮ರಿಂದ ಈ ವಿರೋಧಿಗಳ ನಡುವೆ ಸ್ನೇಹ ಕುದುರಿತು. ೧೩೦೩ರಲ್ಲಿ ಹೊಳಲ್ಕೆರೆಯಲ್ಲಿ ಸೇವುಣರಿಗೂ, ಹೊಯ್ಸಳರಿಗೂ ನಡೆದ ಯುದ್ಧದಲ್ಲಿ ಕಂಪಿಲರಾಯ ಸೇವುಣರ ಪರವಾಗಿ ಸೇನಾಪತಿತ್ವ ವಹಿ

ಸಿದ್ದ. ಈ ಸಮರದಲ್ಲಿ ಮುಮ್ಮಡಿ ಬಲ್ಲಾಳನಿಗೆ ಸಂಬಂಧಿಯಾದ ಸೇನಾನಿ ಸೋಮೆಯ ದಂಡನಾಯಕ ಹತನಾದ. ಕುಮ್ಮಟರು ಮತ್ತು ಹೊಯ್ಸಳರ ನಡುವೆ ಹೀಗೆ ಉಂಟಾದ ವೈಷಮ್ಯ ಮುಂದುವರಿದು, ಮುಮ್ಮಡಿ ಬಲ್ಲಾಳ ೧೩೨೦ರಲ್ಲಿ ದೊರವಡಿಯಲ್ಲಿ ಕಂಪಿಲರಾಯನನ್ನು ದಂಡಿಸಲು ಯತ್ನಿಸಿದರೂ, ಈ ಕದನ ನಿರ್ಣಾಯಕವಾದಂತೆ ಕಂಡುಬರುವುದಿಲ್ಲ. ಕಾಕತೀಯ ಪ್ರತಾಪರುದ್ರನ ಆಕ್ರಮಣವನ್ನು ಕಂಪಿಲರು ಎದುರಿಸಿದರು. ಈ ಮಧ್ಯೆ ೧೩೧೫ರಲ್ಲಿ ಕುಮ್ಮಟ ದುರ್ಗಕ್ಕೆ ಮುತ್ತಿಗೆ ಹಾಕಿದ ಅಲ್ಲಾವುದ್ದೀನ್ ಖಿಲ್ಜಿಯ ಪ್ರಬಲ ಸೇನಾನಿ ಮಲಿಕ್‌ನಾಯಿಬ್ ಕಾಫೂರನೂ ಹತಾಶನಾಗಿ ಹಿಂತಿರುಗಬೇಕಾಯಿತು.

ಮೇಲ್ಕಂಡ ಮುಮ್ಮಡಿ ಸಿಂಗೇಯನಾಯಕನ ಪೂರ್ವಜರು ಯಾರು, ಇಮ್ಮಡಿ ಯಾರು, ಮೊದಲಿಗನು ಯಾರು ಎಂಬುದು ತಿಳಿದಿಲ್ಲ. ಸುಮಾರು ೨೫೦ ವರ್ಷಗಳ ಬಳಿಕ ನಂಜುಂಡ ಕವಿಯಿಂದ ರಚಿತವಾದ 'ರಾಮನಾಥಚರಿತ ಸಾಂಗತ್ಯ'ದಲ್ಲಿ ಅವರ ಮೂಲದ ಬಗ್ಗೆ ಒಂದು 'ಐತಿಹ್ಯ' ಬಂದಿದೆ. ಅದರ ಪ್ರಕಾರ ಸೇವುಣ ರಾಜಕುಮಾರನೊಬ್ಬ 'ಪುಳಿಂದ' ಯುವತಿಯನ್ನು ಮದುವೆಯಾಗಿದ್ದರಿಂದ ಬಹಿಷ್ಕರಿಸಲ್ಪಟ್ಟು 'ಚಿತ್ರಕೂಟ ದುರ್ಗ'ದ ದೊರೆಯನ್ನು ಆಶ್ರಯಿಸಿದ ಮತ್ತು ಈ(ಅರೆ ಸೇವುಣರ) ವಂಶದಲ್ಲಿ ಮುಮ್ಮಡಿ ಸಿಂಗೇಯನಾಯಕನ ಜನನವಾಯಿತು. ಇದಕ್ಕೆ ಐತಿಹಾಸಿಕ ಆಧಾರ ಕಂಡು ಬಂದಿಲ್ಲವಾದ್ದರಿಂದ ಈ ಹೇಳಿಕೆ ಕಾಲ್ಪನಿಕವಾಗಿರಬಹುದು.

ಕುಮ್ಮಟದುರ್ಗದಲ್ಲಿ ಇತ್ತೀಚೆಗೆ ತಮಗೆ ಕಂಡು ಬಂದ ಕ್ರಿ.ಶ. ೧೩೧೫ ಮೇ ೧೪ರ ವೀರಗಲ್ಲಿನ ಶಾಸನದ ಆಧಾರದ ಮೇಲೆ ಜಿ. ವರದರಾಜರಾವ್, ಬಿ. ಆರ್. ತುಬಾಕಿ ಮತ್ತು ಸೀತಾರಾಮ ಜಾಗೀರ್‌ದಾರ್ ಅವರು ಕಂಪಿಲದೇವನು ಹೊಯ್ಸಳ ವಂಶದ ಒಂದು ಶಾಖೆಗೆ ಸಂಬಂಧಪಟ್ಟವನೆಂದು ಅಭಿಪ್ರಾಯಪಟ್ಟಿದ್ದಾರೆ. "ಯಾದವ ನಾರಾಯಣ ಬುಜಬಳಪ(ರಾ)ಕ್ರಮ ಪ್ರತಾಪ ಚಕ್ರವರ್ತಿ ಶ್ರೀ ಮನು ಮಹಾ ಮಂ(ಡಲಿಕ) ಹೊಯ್ಯಸ(ಣ) ವೀರ ಕಂಪಿಲದೇವನು ಕುಮಟದಲ್ಲಿ ರಾಜ್ಯಂಗೆಯುತಿರೆ.."ಎಂಬ ಅದರ ಒಕ್ಕಣಿಕೆ ಗಮನಾರ್ಹವಾಗಿದೆ. ಮಹಾಮಂ(ಡಲಿಕ)ಎಂಬುದೂ ಅದರಲ್ಲಿದೆ ಎಂಬುದನ್ನು ಲಕ್ಷಿಸಬೇಕು. ಎಂಟು ವರ್ಷಗಳ ತರುವಾಯದ(ಅಂದರೆ ಕ್ರಿ.ಶ. ೧೩೨೩ರ) ಇನ್ನೊಂದು ವೀರಗಲ್ಲಿನ ಶಾಸನ ರಾಮಘಡದ ರಾಮ ದೇವಾಲಯದಲ್ಲಿ ಜಿ. ವರದರಾಜರಾವ್ ಅವರು ಶಾಸನತಜ್ಞ ಜಿ.ಎಸ್. ಗಾಯಿ ಅವರ ನೆರವಿನಿಂದ ಉಲ್ಲೇಖಿಸಿದ್ದನ್ನು ಸೀತಾರಾಮ ಜಾಗೀರ್‌ದಾರ್ ಅವರು ವಿದ್ವಾಂಸರ ಗಮನಕ್ಕೆ ತಂದಿದ್ದಾರೆ. ಇದರಲ್ಲಿ "ಶ್ರೀ ವೀರ ಕಂಪಿಲದೇವನ ಮೇಲೆ ಬಲ್ಲಾಳರಾಯನು (ದಂಡೆತ್ತಿ)ಬಂದಲಿ ಯಿಬ್ಬರು ದಾಯದ ದಂಡಿನೊಳಗೆ ದಂಡಿನ ಬಯಿಚಯ್ಯನು...." ಎಂಬ ಉಲ್ಲೇಖ ಬಂದಿದೆ. ಇವೆರಡನ್ನೂ ಒಟ್ಟಿಗೆ ಸೇರಿಸಿದರೆ, ಅವು ಪರಸ್ಪರ ಪೂರಕವಾಗಿ ಮುಮ್ಮಡಿ ಸಿಂಗೇಯನಾಯಕನ ಮೂಲವು ಹೊಯ್ಸಳ ವಂಶದ ಒಂದು ಶಾಖೆಯಲ್ಲಿ ಇದ್ದಿರಬಹುದೆಂದು ಕಾಣುತ್ತದೆ. ಆದರೆ ಇವರು ಯಾವಾಗ ಎಲ್ಲಿಂದ ಬಂದು ಇಲ್ಲಿ ನೆಲೆಸಿದರು ಎಂಬ ಬಗ್ಗೆ ಸುಳಿವಿಲ್ಲ.

ಸುಮಾರು ೧೨೫೪ರಲ್ಲಿ ಪಟ್ಟಕ್ಕೆ ಬಂದ ಹೊಯ್ಸಳ ವೀರಸೋಮೇಶ್ವರನು ಹೊಯ್ಸಳ ಚಕ್ರಾಧಿಪತ್ಯವನ್ನು ತನ್ನ ಇಬ್ಬರು ಮಕ್ಕಳಾದ ನರಸಿಂಹ ಮತ್ತು ರಾಮನಾಥ ಇವರಲ್ಲಿ ಇಬ್ಭಾಗ ಮಾಡಿ ಚಿಕ್ಕವನಾದ ರಾಮನಾಥನಿಗೆ ತಮಿಳುನಾಡಿನ ಭಾಗವನ್ನು ವಹಿಸಿ ಕೊಟ್ಟದ್ದನ್ನೂ ಮತ್ತು ಈ ಅಣ್ಣ-ತಮ್ಮಂದಿರಲ್ಲಿ ಘರ್ಷಣೆ ಆಗುತ್ತಿದ್ದುದನ್ನೂ ಕಂಪಿಲರಾಯನ ಮಗನ ಹೆಸರು ಕುಮಾರ ರಾಮನಾಥ ಎಂಬುದನ್ನೂ ಗಮನಿಸಿ, ಹೊಯ್ಸಳ ರಾಮನಾಥನ ಶಾಖೆಯ ಸಂತತಿ ಇದು ಎಂದು ಮೇಲ್ಕಂಡ ಮೂವರು ವಿದ್ವಾಂಸರು ತರ್ಕಿಸಿದ್ದಾರೆ. ಆದರೆ ಇದರಲ್ಲಿ ಒಂದು ಊನ ಇದೆಯೆಂದು ಅನಿಸುತ್ತದೆ. ರಾಮನಾಥನ ಉತ್ತರಾಧಿಕಾರಿ ಪುತ್ರ ವಿಶ್ವನಾಥನಿಗೆ ಮಕ್ಕಳಿರಲಿಲ್ಲವಾಗಿ ಮುಮ್ಮಡಿ ಬಲ್ಲಾಳನ ಮಹಾರಾಜ್ಯದ ಎರಡೂ ಭಾಗಗಳನ್ನು ೧೩೦೧ರ ಹೊತ್ತಿಗೆ ಒಟ್ಟುಗೂಡಿಸುತ್ತಾನೆ. ಆದ್ದರಿಂದ ಬೇರೆ ಪುರಾವೆ(ಆಧಾರ) ಇಲ್ಲದ ಈ ಸ್ಥಿತಿಯಲ್ಲಿ ಒಂದು ಹೊಯ್ಸಳ ಶಾಖೆಯ ಸೋದರಿಯ ಮೂಲಕ ಕಂಪಿಲ ರಾಯನ ವಂಶ ಉಂಟಾಗಿರಬಹುದೇನೊ ?

"ಕುತುಬಿ ಸುರತಣ ಖಾನಗಳು ನೇಮಿಸಹಿತ...."

ಎಂಬ ಪದಗಳೂ ಮೇಲ್ಕಂಡ ಮೊದಲನೆಯ ವೀರಗಲ್ಲಿನ ಶಾಸನದಲ್ಲಿ ಬಂದಿವೆ. ಈ 'ಕುತುಬಿ ಸುರತಣ' ಅಲ್ಲಾ-ಉದ್-ದೀನ್ ಖಿಲ್ಜಿಯ ಮಗ ಕುತುಬುದ್ದೀನ್ ಮುಬಾರಕ್ ಷಾ ಎಂದು ಅವರು ತಮ್ಮ ಲೇಖನದಲ್ಲಿ ಹೇಳಿದ್ದಾರೆ. ಆದರೆ ಇಲ್ಲಿ ಒಂದು ತೊಡಕಿದೆ. ಆರ್. ಸಿ. ಮಜುಂದಾರ್ ಮತ್ತಿತರರ ಪ್ರಕಾರ ಅಲ್ಲಾ-ಉದ್-ದೀನ್ ಖಿಲ್ಜಿಯ ಮೂರನೆಯ ಮಗ ಮುಬಾರಕ್‌ನು ಕುತುಬ್-ಉದ್-ದೀನ್ (ಮುಬಾರಕ್) ಷಾ ಎಂದು ಬಿರುದು ಧರಿಸಿ ಪಟ್ಟಕ್ಕೆ ಬಂದದ್ದು ಏಪ್ರಿಲ್ ೧೩೧೬ರಲ್ಲಿ. ಅಂದರೆ, ಕುಮ್ಮಟದ ಮೇಲೆ ಆ ದಾಳಿ ೧೩೧೫ರಲ್ಲಿ ನಡೆದು ಸುಮಾರು ಒಂದು ವರ್ಷದ ತರುವಾಯ ಮುಬಾರಕ್‌ನು ಕುತುಬ್-ಉದ್-ದೀನ್ ಷಾ ಆದದ್ದು. ಆದ್ದರಿಂದ, ಆ ವೀರಗಲ್ಲಿನ ಶಾಸನವನ್ನು ಬರೆಯಿಸಿ ನೆಟ್ಟಿದ್ದು ಆ ವೀರನು ಮಡಿದು ಕೆಲಕಾಲ ಸಂದ ಮೇಲೆ, ಅಂದರೆ ಮುಬಾರಕನು ಕುತುಬುದ್ದೀನ್ ಎಂಬ ಹೊಸ ಹೆಸರಿನಿಂದ ಸುಲ್ತಾನನಾದ ಬಳಿಕ ಎಂದು ಗ್ರಹಿಸಬಹುದೇನೊ? (ಈತನು ಸುಲ್ತಾನನಾದ ಬಳಿಕ ದೇವಗಿರಿಯವರೆಗೆ ಬಂದಿದ್ದ. ಆದರೆ ದಕ್ಷಿಣಕ್ಕೆ ಬಂದ ಬಗ್ಗೆ ದಾಖಲೆ ಇಲ್ಲ).

ಪ್ರಬಲರಾಜರಾಗಿದ್ದ ಸೇವುಣರು, ಕಾಕತೀಯರು, ಪಾಂಡ್ಯರು ನಾಶವಾಗಿ, ಮುಮ್ಮಡಿ ಬಲ್ಲಾಳನೂ ಬಗ್ಗಿದ್ದರೂ, ಕಂಪಿಲಿ ಸಣ್ಣ ರಾಜ್ಯವಾದರೂ ಇನ್ನೂ ತಲೆ ಎತ್ತಿ ನಿಂತಿತ್ತು. ಕಂಪಿಲರು ಸುಲ್ತಾನ್ ಮಹಮ್ಮದ್ ಬಿನ್ ತಘಲಕ್‌ನ ಅಧಿಕಾರಿಗಳಿಗೆ ಕಪ್ಪಕಾಣಿಕೆಗಳನ್ನು ಕೊಡಲೂ ನಿರಾಕರಿಸಿದರಲ್ಲದೆ, ಅವನ ವಿರುದ್ಧ ಬಂಡೆದ್ದ ಅವನ ಸೋದರ ಸಂಬಂಧಿ ಬಹಾ-ಉದ್-ದೀನ್ ಗುರ್‌ಶಪ್ಪನಿಗೂ ಅವನ ಸಂಸಾರಕ್ಕೂ ಇವರು ಆಶ್ರಯ ಕೊಡುವ ಧೈರ್ಯ ಮಾಡಿದ್ದು ಶರಣಾಗತರಿಗೆ ರಕ್ಷಣೆ ಕೊಡುವ ಪುರಾತನ ಸತ್‌ಸಂಪ್ರದಾಯಕ್ಕೆ ಅನುಗುಣವಾಗಿತ್ತು. ಸುಲ್ತಾನನು ದೇವಗಿರಿಯಲ್ಲಿ ಠಾಣ್ಯ ಹಾಕಿ, ಕಳುಹಿಸಿದ ಪಡೆ ಎರಡು ಸಲ ದಾಳಿಮಾಡಿ ವಿಫಲವಾಗಿ ಸೇನಾನಿ ಮಲಿಕ್‌ಝಾದಾನ ಮುಂದಾಳತ್ವದಲ್ಲಿ ಮೂರನೆಯ ಬಾರಿ ಮತ್ತಷ್ಟು ಪ್ರಬಲವಾಗಿ ಮುತ್ತಿಗೆ ಹಾಕಿದಾಗ,ಕುಮ್ಮಟರ ಘೋರ ಪ್ರತಿಭಟನೆ,ಶೌರ್ಯ-ಸಾಹಸ, ಬಲಿದಾನ ದಂಗುಬಡಿಸುವಂಥದು, ಅಸಾಮಾನ್ಯವಾದದ್ದು, ಚಿರಸ್ಮರಣೀಯವಾದದ್ದು. ಕಂಪಿಲರಾಯ ಮಹಾವೀರ ರಾಜಕುಮಾರ ರಾಮನಾಥ ಅನೇಕ ಸೈನ್ಯಾಧಿಕಾರಿಗಳು, ಸೈನಿಕರು ಕೋಟೆಯಿಂದ ಹೊರಬಂದು ರಣರಂಗದಲ್ಲಿ ವೀರಾವೇಶದಿಂದ ಹೋರಾಡಿ ಮಡಿಯುತ್ತಾರೆ. ಅವರ ಮಡದಿಯರು ಮಾನಭಂಗಕ್ಕಿಂತ ಮರಣವೇ ಲೇಸೆಂದು ಸಾಮೂಹಿಕವಾಗಿ ಅಗ್ನಿಗೆ ಆಹುತಿಯಾಗುತ್ತಾರೆ. (ಇದು ರಜಪೂತರ ಜೋಹರನ್ನು ನೆನಪಿಗೆ ತರುತ್ತದೆ.) ಇನ್ನೊಂದು ಆಶ್ಚರ್ಯದ, ಚಕಿತಗೊಳಿಸುವ ಸಂಗತಿಯೆಂದರೆ ಇಂತಹ ದುರಂತದ ಸನ್ನಿವೇಶದಲ್ಲಿಯೂ ಪ್ರಜೆಗಳು ಎದೆಗುಂದದೆ ಬಲಿಷ್ಠ ವಿಜಯಿ ಸುಲ್ತಾನನಿಂದ ನೇಮಿಸಲ್ಪಟ್ಟ ರಾಜ್ಯಪಾಲ ಮಲಿಕ್ ನಾಯಿಬ್ ಮುಹಮ್ಮದನಿಗೆ ಸಹಕಾರ ನೀಡದೆ, ಸರಕುಗಳನ್ನು ಒದಗಿಸದೆ, ತೆರಿಗೆಗಳನ್ನು ಕೊಡದೆ, ಇಲ್ಲಿ ಅವನ ಆಳ್ವಿಕೆಯನ್ನು ಅಸಾಧ್ಯ ಮಾಡಿದರು. ಸುಲ್ತಾನನ ಪ್ರಾಂತಾಧಿಕಾರಿ ಪಲಾಯನ ಮಾಡಬೇಕಾಯಿತು. ಗೆದ್ದವರಿಗೆ ಸೋತವರಿಂದ ಇಂಥ ಅಸಹಕಾರ ಅತಿ ವಿರಳ. ಕಂಪಿಲರ ಮಹಾಬಲಿದಾನದಿಂದ ಜನರಲ್ಲಿ ಹೊಸ ಜಾಗೃತಿ, ಚೈತನ್ಯ, ಆತ್ಮವಿಶ್ವಾಸ, ಧೈರ್ಯ ಉಂಟಾಗಲು ಕಾರಣವಾಗಿ ಹೊಸ ಐತಿಹಾಸಿಕ ಅಧ್ಯಾಯಕ್ಕೇ ನಾಂದಿಯಾಯಿತು.

ಇಬ್ನ್ ಬಟುಟಾ, ಇಸಾಮಿ, ಫರ್ನಾವೊ ನುನಿಜ್ ಮುಂತಾದ ವಿದೇಶಿಯರು, ದೇಶೀಯ ಜಾನಪದರು, ಕಾವ್ಯಕಾರರು ಈ ಅತ್ಯಂತ ಅಸಾಧಾರಣ ಘಟನೆಗಳನ್ನು ಚಿತ್ರವತ್ತಾಗಿ ವಿವರಿಸಿದ್ದಾರೆ. ಪರದಾರ ಸೋದರ ಕುಮಾರ ರಾಮನ ಶುದ್ಧ ಚಾರಿತ್ರ್ಯ, ಶೀಲ, ಶೌರ್ಯ, ಸಾಹಸ, ವ್ಯಕ್ತಿತ್ವ, ವರ್ಚಸ್ಸು ಕರ್ನಾಟಕದ ತುಂಬ ಜನಜನಿತವಾಗಿ ಕಾವ್ಯಗಳಿಗೆ, ಜಾನಪದ ಹಾಡುಗಳಿಗೆ, ಯಕ್ಷಗಾನಗಳಿಗೆ, ನಾಟಕಗಳಿಗೆ ಕಥಾವಸ್ತುಗಳನ್ನು ಒದಗಿಸಿವೆ. ನಿಸ್ಸೀಮ ಸದ್ಗುಣಿ, ಸುಶೀಲ, ಅಪ್ರತಿಮವೀರ ಕುಮಾರ ರಾಮ ಜನರ ದೃಷ್ಟಿಯಲ್ಲಿ ಮಹಿಮಾಪುರುಷನಾಗಿ ಪುರಾಣಪುರುಷನಾಗಿ ಕಂಗೊಳಿಸಿದ್ದಾನೆ.ಅವರ ಹೃದಯ ಸಿಂಹಾಸನದಲ್ಲಿ ಚಿರಸ್ಥಾಯಿಯಾಗಿ ಆಸೀನನಾಗಿದ್ದಾನೆ. ಅವನ ಹೆಸರಿನಲ್ಲಿ ಅವನಿಗೆ ಸ್ಮಾರಕವಾಗಿ ದೇವಾಲಯಗಳೂ ನಿರ್ಮಾಣವಾಗಿವೆ. ಕವಿಗಳಾದ ನಂಜುಂಡ, ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿ ಅನುಕ್ರಮವಾಗಿ ಸುಮಾರು ೧೬, ೧೭ ಮತ್ತು ೧೮ನೆಯ ಶತಮಾನಗಳಲ್ಲಿ 'ಕುಮಾರರಾಮಚರಿತೆ', 'ಚೆನ್ನರಾಮ

ಸಾಂಗತ್ಯ' ಮತ್ತು 'ಬಾಲರಾಮಸಾಂಗತ್ಯ'ಗಳನ್ನು ರಚಿಸಿದರು. ೧೯೬೬ರಲ್ಲಿ ಪ್ರಕಟವಾದ ಜಿ. ವರದರಾಜ ರಾವ್ ಅವರ 'ಕುಮಾರರಾಮನಸಾಂಗತ್ಯ'ಗಳು ಎಂಬ ಸಂಶೋಧನೆಯ ಮಹಾ ಪ್ರಬಂಧ ಒಂದು ದೊಡ್ಡ ಕೊಡುಗೆ. ಬಿ.ಎಸ್. ಗದ್ದಗಿಮಠರವರು ಕುಮಾರರಾಮನ ಬಗೆಗಿನ ಜಾನಪದ ಹಾಡುಗಳನ್ನು ಸಂಕಲಿಸಿದ್ದಾರೆ. ಈ ಎಲ್ಲ ಕೃತಿಗಳಲ್ಲಿ ಕೆಲವು ಐತಿಹಾಸಿಕ ಅಂಶಗಳಿದ್ದರೂ ಇವು ರಂಜನೆಗಾಗಿ ಕಲ್ಪಿತವಾದ ಹೇರಳ ಅಸಂಭವ ಸನ್ನಿವೇಶ ಗಳಿಂದ ಅತಿಶಯೋಕ್ತಿಗಳಿಂದ ಕೂಡಿದ ಕಲಾತ್ಮಕ ಕೃತಿ ಗಳು. ಆ ಸಾಂಗತ್ಯಕಾರರು ತಾವು ಬರೆದದ್ದು ಬರಿ ನರಕೃತಿಗಳಲ್ಲ, ದೈವಾಂಶಸಂಭೂತ ಮಹಾಪುರುಷನ ಪುಣ್ಯಪ್ರದವಾದ ಕಥೆಯ ನಿರೂಪಣೆ ಎಂದು ಹೇಳಿ ಕೊಂಡಿದ್ದಾರೆ. ಮಹಾಮಹಿಮ ಕಥಾನಾಯಕ ಕುಮಾರ ರಾಮನಾಥ ಜನಿಸಿದ್ದು ಚತುರ್ಥಕುಲದಲ್ಲಿ (ಶೂದ್ರರಲ್ಲಿ) ಎಂದೂ ಅವರೇ ತಿಳಿಸಿದ್ದಾರೆ, ಇದು ಒಂದು ಸ್ವಾರಸ್ಯ ಕರವಾದ ಸಂಗತಿ. ಕರ್ನಾಟಕದ ಬೇಡ ಜನಾಂಗದವರು ಕುಮಾರರಾಮ ತಮ್ಮವ, ತಮ್ಮ ಆರಾಧ್ಯ ಪುರುಷ, ದೇವತೆಯೆಂದು ಗೌರವಿಸುತ್ತಾರೆ, ಪೂಜಿಸುತ್ತಾರೆಂಬು ದನ್ನು ಇಲ್ಲಿ ಗಮನಿಸಬೇಕು. ಈ ಮುಂಚೆ ಪ್ರಸ್ತಾಪಿಸಿ ದಂತೆ, ಕುಮಾರರಾಮನ ಪೂರ್ವಜರು ಹೊಯ್ಸಳ ವಂಶಕ್ಕೆ ಸಂಬಂಧಪಟ್ಟವರೆಂದು ಒಪ್ಪುವುದಾದರೆ, 'ಚತುರ್ಥಕುಲ' ಅವರಿಗೂ ಅನ್ವಯಿಸಬಲ್ಲದು.

ಆ ಮೂವರು ಸಾಂಗತ್ಯಕಾರರ ಕೃತಿಗಳಲ್ಲಿ ಇಲ್ಲದ, ಕುಮಾರರಾಮನ ಅಂತ್ಯಕಾಲಕ್ಕೆ ಸಂಬಂಧಪಟ್ಟ ಕೆಲವು ಅಂಶಗಳು ಸುಮಾರು ೧೬-೧೭ನೆಯ ಶತಮಾನದಲ್ಲಿ ಬಾಳಿದ ಬಸವಣಯ್ಯನು ಬರೆದ 'ನವರತ್ನಮಾಲಿಕೆ' ಯಲ್ಲಿವೆ ಎಂಬುದನ್ನು ಇತ್ತೀಚೆಗೆ (೧೯೮೭ರಲ್ಲಿ) ಎಸ್. ಶಿವಣ್ಣನವರು ಬೆಳಕಿಗೆ ತಂದಿದ್ದಾರೆ.

ಒಟ್ಟಾರೆ ಹೇಳಬೇಕಾದರೆ, ಕೇವಲ ಅರ್ಧಶತ ಮಾನ ಬಾಳಿದ, ಕಂಪಿಲಿ ಅಥವಾ ಕುಮ್ಮಟ ಈ ಸಣ್ಣ ರಾಜ್ಯದ ಪಾತ್ರ ದೊಡ್ಡದು ಮಾರ್ಮಿಕವಾದದ್ದು. ವಿಜಯನಗರದ ಉದಯಕ್ಕೆ ಹಲವು ಸ್ರೋತಗಳಿಂದ ಪ್ರೇರಣೆಗಳು ದೊರಕಿದವಲ್ಲದೆ, ಈ ಪ್ರದೇಶದಲ್ಲಿಯೇ ಈ ಅಪೂರ್ವ ಮಹಾರಾಜ್ಯ ಹುಟ್ಟಿದುದಕ್ಕೆ ಕೆಲವು ಕಾರಣ ಗಳಿವೆಯಷ್ಟೆ. ಈ ನಿರ್ಧಾರಕ ವಿಷಯದಲ್ಲಿ ಈ ಚಿಕ್ಕ ತಡೆರಾಜ್ಯ ತನ್ನ ಉಜ್ವಲ, ಧೀರೋದಾತ್ತ ನಿಲುವು, ಶೌರ್ಯ-ಸಾಹಸ, ಬಲಿದಾನ ಮತ್ತು ಶೀಲಗಳಿಂದ ಸ್ಫೂರ್ತಿಸೆಲೆಯಾಯಿತಲ್ಲದೆ, ಚಿರಕಾಲ ಬಾಳುವ ಕೆಲವು ಮೌಲ್ಯಗಳನ್ನು ನೀಡಿತು.

ಈ ಪ್ರಬಂಧವನ್ನು ಮಂಡಿಸಿಯಾದ ಮೇಲೆ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಇಲಾಖೆಯವರು ಕುಮ್ಮಟದುರ್ಗದಲ್ಲಿ ಕಂಡುಬಂದ ವೀರಗಲ್ಲುಗಳ ಮೇಲಣ ಎರಡು ಶಾಸನಗಳನ್ನು ಬೆಳಕಿಗೆ ತಂದಿದ್ದಾರೆ. ಸುಲ್ತಾನನ ಎರಡು ದಾಳಿಗಳಲ್ಲಿ ರಾಮನಾಯಕ ಮತ್ತು ಸಿಂಗ ಎಂಬ ಇಬ್ಬರು ವೀರರು ಆ ಕದನಗಳಲ್ಲಿ ಹೋರಾಡುತ್ತ ಮಡಿದರೆಂದು ಅವುಗಳಿಂದ ತಿಳಿದಿದೆ.